# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್ಎನ್ಎಸ್ - 19

4ನೇ ವರ್ಷ 36ನೇ ಸಂಚಿಕೆ ಕೊಪ್ಪ 4-5-1986 ಭಾನುವಾರ ಬೆಲೆ 40 ಪೈಸೆ


## ಹೆಗ್ಡೆ ಸಂಪುಟ ವಜಾಕ್ಕೆ ಶೃಂಗೇರಿ ಕಾಂಗ್ರೆಧರಣಿ

ಶೃಂಗೇರಿ: ತಾ॥ ಕಾಂಗ್ರೆಸ್ (ಐ) ಸಮಿತಿಯವರು ಏ.30ರಂದು ಅಧ್ಯಕ್ಷರಾದ ಕೆ. ಆರ್. ಅಣ್ಣಯ್ಯ ಹೆಗ್ಗಡೆಯವರ ನೇತೃತ್ವದಲ್ಲಿ ಬೃಹತ್ ಮೆರವಣಿಗೆಯಲ್ಲಿ ತಾಲ್ಲೂಕು ಕಛೇರಿಗೆ ತೆರಳಿ ಕಛೇರಿ ಮುಂಭಾಗದಲ್ಲಿ ಸತ್ಯಾಗ್ರಹ ಕುಳಿತು, ಮುಖ್ಯಮಂತ್ರಿ ರಾಮಕೃಷ್ಣ ಹೆಗ್ಗಡೆ ಮತ್ತು ಅವರ ಸಚಿವ ಸಂಪುಟ ಆಡಳಿತ ನಡೆಸುವಲ್ಲಿ ವಿಫಲಗೊಂಡು ಎಲ್ಲಾ ಕ್ಷೇತ್ರಗಳಲ್ಲೂ, ಭ್ರಷ್ಟಾಚಾರ, ಸ್ವಾರ್ಥ, ಸ್ವಜನಪಕ್ಷಪಾತ ಜಾಸ್ತಿಯಾಗಿರುವುದಲ್ಲದೆ, ಬಾಟ್ಲಿಂಗ್ ಹಗರಣದಲ್ಲಿ ಉಚ್ಚ ನ್ಯಾಯಾಲಯದ ತೀರ್ಪಿನಂತೆ ನೈತಿಕವಾಗಿ ಅಧಿಕಾರದಲ್ಲಿ ಮುಂದುವರಿಯಲು ಅನರ್ಹರಾಗಿರುವುದರಿಂದ ಅವರ ಸಂಪುಟವನ್ನು ವಜಾ ಮಾಡಬೇಕೆಂದು ಒತ್ತಾಯಿಸುವ ಮನವಿಯನ್ನು ತಹಸೀಲ್ದಾರರ ಮೂಲಕ ಸಲ್ಲಿಸಲಾಯಿತು.

## ಅಕ್ರಮ ಶ್ರೀಗಂಧ ಸಾಗಾಣಿಕೆ ಪತ್ತೆ; ಕಾರು ವಶ

ಕೊಪ್ಪ: ಏ. 27ರ ರಾತ್ರಿ 1.30ರ ಹೊತ್ತಿನಲ್ಲಿ ಶ್ರೀಗಂಧದ ತುಂಡುಗಳನ್ನು ತುಂಬಿಕೊಂಡು ಹೋಗುತ್ತಿದ್ದ ಎಂಇಎ 7842 ನಂಬರಿನ ಕಾರನ್ನು ಕೊಪ್ಪ ಅರಣ್ಯ ವಿಭಾಗದ ಸಂಚಾರಿ ದಳದವರು ಕೂವೆಯಿಂದ ಹಿಂಬಾಲಿಸಿಕೊಂಡು ಹೋದಾಗ ಬಾಳೂರು ಕೈಮರದಲ್ಲಿ ಕಾರನ್ನು ರಸ್ತೆಗೆ ಅಡ್ಡವಾಗಿ ನಿಲ್ಲಿಸಿ, ಡ್ರೈವರ್ ಸಹಿತ ಕಾರಿನಲ್ಲಿದ್ದವರೆಲ್ಲ ಪರಾರಿಯಾಗಿದ್ದು, ಸುಮಾರು 30 ಸಾವಿರ ರೂ. ಬೆಲೆಯ ಶ್ರೀಗಂಧ ಸಹಿತ ಕಾರನ್ನು ವಶಪಡಿಸಿಕೊಳ್ಳಲಾಗಿದೆ.

ಈ ಕಾರ್ಯಾಚರಣೆಯಲ್ಲಿ ಸಂಚಾರಿ ದಳದ ರೇಂಜರ್ ಶ್ರೀನಿವಾಸರಾವ್, ಫಾರೆಸ್ಟರ್ ಮಂಜಪ್ಪ, ಗಾರ್ಡ್‌ಗಳಾದ ಬಿ.ಆರ್.ವಿ. ನಾಯ್ಕ, ಮೂರ್ತಿ, ರೇವಣ್ಣ, ಡಿ.ಜೆ. ಸೋಜ, ಡ್ರೈವರ್ ವಾಸು ಇವರುಗಳು ಭಾಗವಹಿಸಿದ್ದರು.

## ಕೊಪ್ಪ ಪ್ರ. ದ. ಕಾಲೇಜು ವಿಸ್ತರಣೆಗೆ 15 ಲಕ್ಷ ರೂ. ಮಂಜೂರು

ಕೊಪ್ಪ: ಇಲ್ಲಿನ ಪ್ರಥಮ ದರ್ಜೆ ಕಾಲೇಜು ಕಟ್ಟಡದ ವಿಸ್ತರಣೆಗಾಗಿ 15 ಲಕ್ಷ ರೂ. ಮಂಜೂರಾಗಿದೆ. ಈ ಹಣ 3 ಹಂತಗಳಲ್ಲಿ ಬಿಡುಗಡೆಯಾಗಲಿದ್ದು ಈ ವರ್ಷ 5 ಲಕ್ಷ ರೂ. ದೊರೆಯಲಿದೆ.

ಸಚಿವ ಗೋವಿಂದ ಗೌಡರು ಮೊನ್ನೆ ಕಾಲೇಜಿಗೆ ಭೇಟಿ ನೀಡಿ, ಕಟ್ಟಡ ನಿರ್ಮಾಣ ಕುರಿತಂತೆ ಪ್ರಿನ್ಸಿಪಾಲರು, ಅಧ್ಯಾಪಕರು ಮತ್ತು ಲೋ॥ ಇಲಾಖೆ ಅಧಿಕಾರಿಗಳೊಂದಿಗೆ ಚರ್ಚಿಸಿದರು. ಕಟ್ಟಡದ ವಿನ್ಯಾಸ ಅಂಗೀಕೃತವಾಗಿದೆ.

ಪ್ರತಿಯೊಂದು ಶಾಖಾ ಮುಖ್ಯಸ್ಥರಿಗೂ ಒಂದೊಂದು ಕೊಠಡಿ, ಕ್ರೀಡೆ, ಎನ್. ಎಸ್. ಎಸ್. ಮುಂತಾದವುಗಳಿಗೆ ಒಂದೊಂದು ಕೋಣೆ, ಸೆಮಿನಾರ್ ಹಾಲ್ ಮುಂತಾಗಿ 19 ಕೊಠಡಿಗಳು ಹಾಗೂ 4 ಪ್ರಯೋಗ ಶಾಲಾ ಕೊಠಡಿಗಳನ್ನು ನಿರ್ಮಿಸಲು ಯೋಚಿಸಲಾಗಿದೆ.

ಇನ್ನೂ 25 ವರ್ಷಗಳಿಗಾದರೂ ಸಾಕಾಗುವಷ್ಟು, ಕಾಲೇಜಿನ ಎಲ್ಲಾ ತರದ ಅವಶ್ಯಕ ಕಟ್ಟಡಗಳನ್ನೂ ಈ ಗ್ರ್ಯಾಂಟ್‌ನಿಂದ ಪೂರೈಸಿಕೊಳ್ಳಲು ಉದ್ದೇಶಿಸಲಾಗಿದೆ. ಟೆಂಡರ್ ಮುಂತಾದ ಕ್ರಮಗಳು ಇಷ್ಟರಲ್ಲೇ ಆರಂಭವಾಗಲಿವೆ.

### ಕಿರಿಯ ಕಾಲೇಜಿಗೆ 4.5 ಲಕ್ಷ

ಇಲ್ಲಿನ ಕಿರಿಯ ಕಾಲೇಜಿನ ವಿಸ್ತರಣಾ ಕಟ್ಟಡಗಳಿಗಾಗಿಯೂ ಸಹ 4.5 ಲಕ್ಷ ರೂ. ಮಂಜೂರಾಗಿದ್ದು, ನೆಲ ಅಂತಸ್ತಿನಲ್ಲಿ 6 ಕೋಣೆಗಳನ್ನೂ ಮಹಡಿಯ ಮೇಲೆ 6 ಕೋಣೆಗಳನ್ನೂ ನಿರ್ಮಿಸಲು ಹಾಗೂ ಇನ್ನೂ ಎರಡು ಮಹಡಿಗಳ ನಿರ್ಮಾಣಕ್ಕೆ ಅವಕಾಶ ಇಟ್ಟುಕೊಳ್ಳಲು ಯೋಚಿಸಲಾಗಿದೆ.

ಇದಲ್ಲದೆ ಏಲಕ್ಕಿ ಮಂಡಳಿ ವತಿಯಿಂದ 1 ಲಕ್ಷ ರೂ ಸಹಾಯಧನದ ಆಶ್ವಾಸನೆ ಈ ಹಿಂದೆ ದೊರೆತಿರುವುದನ್ನು ಸಹ ಮಂಜೂರು ಮಾಡಿಸಿಕೊಳ್ಳಲು ಪತ್ರ ವ್ಯವಹಾರ ನಡೆದಿದೆ. ಇಲ್ಲೂ ಸಹ ಕಟ್ಟಡದ ವಿನ್ಯಾಸ ಅಂಗೀಕೃತಗಾಗಿ ಬಂದಿದೆ.

### ಶೃಂಗೇರಿ, ನ.ರಾ.ಪುರ 2 ಶಾಲೆಗಳಿಗೆ ಗ್ರ್ಯಾಂಟ್

ಶೃಂಗೇರಿಯ ಮಲ್ಲಿಕಾರ್ಜುನ ಬೀದಿಯಲ್ಲಿರುವ ಹಿರಿಯ ಪ್ರಾಥಮಿಕ ಶಾಲೆಗೆ 4.5 ಲಕ್ಷ ರೂ. ಮತ್ತು ನ.ರಾ. ಪುರದ ಅಗ್ರಹಾರದ ಪ್ರಾಥಮಿಕ ಶಾಲೆಗೆ 1.5 ಲಕ್ಷ ರೂ. ಮಂಜೂರಾತಿ ದೊರೆತಿದೆ.

### ಕೊಪ್ಪ ಆಸ್ಪತ್ರೆ

ಕೊಪ್ಪದ ಸರ್ಕಾರಿ ಆಸ್ಪತ್ರೆಯಲ್ಲಿ ಅಡಿಗೆ ಮನೆ ಸಂಕೀರ್ಣದ ಕಟ್ಟಡದ ಕೆಲಸ ನಡೆಯುತ್ತಿದ್ದು ಆಗಸ್ಟ್ ವೇಳೆಗೆ ಮುಗಿಯುವ ನಿರೀಕ್ಷೆಯಿದೆ. ಇದಕ್ಕಾಗಿ ಜಿಲ್ಲಾ ಉಪಯೋಜನೆಯಿಂದ 1 ಲಕ್ಷ ರೂ. ಗಳನ್ನು ಒದಗಿಸಲಾಗಿದೆ. ಆಸ್ಪತ್ರೆಯ ಆಡಳಿತ ವಿಭಾಗದ ಕಟ್ಟಡದ ಪ್ಲಾನಿಗೆ ಆರೋಗ್ಯ ಇಲಾಖೆಯಿಂದ ಇನ್ನೂ ಅಂತಿಮ ಅಂಗೀಕಾರ ದೊರೆತಿಲ್ಲವೆನ್ನಲಾಗಿದೆ.

## ಕಿಗ್ಗದ ಬಳಿ ನಂದಿನಿ ಹೊಳೆ ಸೇತುವೆ ಸಂಚಾರಕ್ಕೆ ಸಿದ್ಧ

ಕಿಗ್ಗ: ಇಲ್ಲಿಗೆ ಸಮೀಪ ಕೆಲ್ಲಾರಿನಲ್ಲಿ ನಂದಿನಿ ಹೊಳೆಗೆ ಹೊಸದಾಗಿ ನಿರ್ಮಿಸಲಾಗಿರುವ 1.2 ಲಕ್ಷ ರೂ. ವೆಚ್ಚದ ಕಾಲು ಸೇತುವೆ ಇನ್ನೊಂದು ವಾರದಲ್ಲಿ ಸಂಚಾರಕ್ಕೆ ತೆರವಾಗುವುದೆಂದು ಲೋಕೋಪಯೋಗಿ ಇಲಾಖೆ ಸಹಾಯಕ ಎಕ್ಸಿಕ್ಯೂಟಿವ್ ಇಂಜಿನಿಯರ್ ಚಿನ್ನಪ್ಪ ಹೆಗ್ಡೆಯವರು 'ಮುಂಜಾವು'ಗೆ ತಿಳಿಸಿದ್ದಾರೆ. ಈ ಸೇತುವೆಯಲ್ಲಿ ಟ್ರಾಕ್ಟರು ಮತ್ತು ಮಿನಿ ಲಾರಿಗಳವರೆಗಿನ ವಾಹನಗಳು ಓಡಾಡಬಹುದೆಂದೂ ಅವರು ತಿಳಿಸಿದ್ದಾರೆ.

## ಶಿವಮೊಗ್ಗ ಅಡಿಕೆ ಪೇಟೆ

ತಾರೀಖು: 29.4.86

| | |
|---|---|
| ಸರಕು : | 2710–3090 |
| ಬೆಟ್ಟೆ : | 1814–2160 |
| ಗೊರಬಲು : | 1309–1749 |
| ಏಲಕ್ಕಿ : | 125–75 |
| ಕಾಳು ಮೆಣಸು | 3059–4050 |
| ಸೀಗೇಕಾಯಿ | — |

## ಸಾಗರ ಅಡಿಕೆ ಪೇಟೆ

ತಾ॥ 30–4–1986

| | |
|---|---|
| ಸಿಪ್ಪೆ ಗೋಟು | ರೂ. 509ರಿಂದ 788 |
| ಚಾಲಿ | ರೂ. 1609ರಿಂದ 1809 |
| ಆಪಿ | ರೂ. 3001ರಿಂದ 3299 |

## ಏಲಕ್ಕಿ ಧಾರಣೆ

ಸಕಲೇಶಪುರ

| ವ್ಯಾಪಾರದ ತಾರೀಖು | ಗರಿಷ್ಠ ಧಾರಣೆ | ಸರಾಸರಿ ಧಾರಣೆ |
|---|---|---|
| 15.4.86 | 201 | 107 |
| 16.4.86 | 210 | 114 |
| 17.4.86 | 209 | 97 |
| 18.4.86 | 201 | 105 |

## ವೇದಿಕೆ

# "ಸ್ವಾರ್ಥಲಾಲಸೆಯಿಂದ ಹೊರತಾದ ವೇದಿಕೆ ರಚನೆಯಾಗಲಿ"

ನಿಮ್ಮ ಪತ್ರಿಕೆಯಲ್ಲಿ ಪ್ರಕಟವಾಗುತ್ತಿರುವ ಸಹಪಂಕ್ತಿ ಭೋಜನದ ಕುರಿತ ವಿಚಾರ ವೇದಿಕೆ ಒಂದು ದೃಷ್ಟಿಯಿಂದ ಸ್ವಾಗತಾರ್ಹ ಆದರೆ ಅದನ್ನು ರೂಪಿಸುವಲ್ಲಿ ನಮ್ಮ ನಾಯಕರು ಕೈಗೊಂಡ ಕ್ರಮಗಳು ಅತೀ ಶೋಚನೀಯವಾಗಿವೆ. ಇದರ ಹಿನ್ನೆಲೆಯಲ್ಲಿ ಮಾತ್ಸರ್ಯ ಎದ್ದು ಕಾಣುತ್ತಿದೆ. ಕೆಲವರು ಜಾತಿವಾದದಲ್ಲಿ ಮುಳುಗಿಕೊಂಡೇ ಜಾತಿ ತೊಡೆದುಹಾಕಲು ಪಣ ತೊಟ್ಟಿದ್ದಾರೆ. ಇಲ್ಲಿ ಜಾತಿ ತೊಡೆದುಹಾಕುವಾಗ ಗುಂಪುಗಾರಿಕೆ ಅಸ್ತಿತ್ವಕ್ಕೆ ಬರುತ್ತಿದೆ. ಇದು ನಿಜವಾಗಿಯೂ ಕ್ರಾಂತಿಯನ್ನೇ ಕಾಣುತ್ತದೆ. ಪ್ರತಿಫಲ ಶೂನ್ಯ

ಜಾತಿ ಭೇದ ಪ್ರತಿಯೊಂದು ವರ್ಗ– ಜಾತಿಗಳಲ್ಲಿಯೂ ಕಾಣಬಹುದಾಗಿದೆ. ಇದಕ್ಕೆ ಯಾವುದೇ ಒಂದು ಜಾತಿ ಹೊಣೆಯಲ್ಲ. ಈ ವೇದಿಕೆ ಒಂದು ಜಾತಿಯನ್ನು ಹೀಗಳೆಯುವ ವೇದಿಕೆಯಾಗಬಾರದು. ಜಾತಿ ತೊಡೆದು ಹಾಕುವುದಾದ್ದರಿಂದ ಜಾತಿ ಪ್ರಶ್ನೆ ಮತ್ತೆ ಉದ್ಭವಿಸಬಾರದು. ಮತ್ತೆ ಮತ್ತೆ ಜಾತಿಗೆ ವಿಶೇಷತೆ ಕೊಡಬಾರದು. ಕೆಲವು ಸ್ವಾರ್ಥ ಪೂರಿತ ವ್ಯಕ್ತಿಗಳ ಕೈಗೊಂಬೆಯಾಗಿ ಕುಣಿಯುವ ಯುವಕರು ಯೋಚಿಸಬೇಕು: ಯಾವ ರೀತಿಯಿಂದ ಜಾತಿಯನ್ನು ತೊಡೆದು ಹಾಕಬಹುದೆಂದು.

ಶಿಕ್ಷಣ ಕ್ಷೇತ್ರದಲ್ಲಿ ಇಂಥದೊಂದು ಉದಾಹರಣೆಯನ್ನು ನಾವು ಕಾಣುತ್ತಿದ್ದೇವೆ. ಕಾಲೇಜಿನಲ್ಲಿ ರೂಪಿಸಿರುವ ಕೇವಲ ಹತ್ತು ದಿನದ ರಾಷ್ಟ್ರೀಯ ಸೇವಾ ಯೋಜನೆ ಶಿಬಿರವು ವಿದ್ಯಾರ್ಥಿಯ ಜೀವನ ಪರ್ಯಂತ ಮಾದರಿಯಾಗಿ ಉಳಿಯುತ್ತದೆ. ಕಾರಣ ಇಲ್ಲಿ ಹಲವು ಜಾತಿಗಳಿಂದ ಬಂದಿದ್ದರೂ ಸಹ ಜಾತಿಯೆಂಬ ಚಿಕ್ಕ ಪ್ರಶ್ನೆಯೂ ಸಹ ಉದ್ಭವಿಸುವುದಿಲ್ಲ. ಇದನ್ನು ಮನಗಂಡಾಗ ಇಂಥ ಸಾರ್ವಜನಿಕವಾದ ಇತರ ವೇದಿಕೆಗಳು ರೂಪಿತವಾಗಬೇಕೆಂದು ಕಾಣುತ್ತದೆಯೇ ವಿನಃ ಈ ರೀತಿಯಾದ ಏಕ ಪಕ್ಷೀಯ ನೀತಿ ಮನಸ್ಸಿಗೆ ತುಂಬಾ ಬೇದನೆನಿಸುತ್ತಿದೆ.

ಕೆಲವರಂತೂ ಗಾಂಧಿ ವಿಚಾರವನ್ನು ಕೈಗೆತ್ತಿಕೊಂಡಿದ್ದಾರೆ. ಗಾಂಧಿ ಈ ರೀತಿಯ ಕ್ರಾಂತಿಯನ್ನು ಬಯಸಿರಲಿಲ್ಲ. ಅವರು ಶಾಂತಿ. ಸಾಮರಸ್ಯ ಮತ್ತು ಸಮನ್ವಯ ಅಭಿಪ್ರಾಯದಲ್ಲಿ ಆಸಕ್ತರಾಗಿದ್ದರು. ಶತಶತಮಾನಗಳಿಂದ ನಡೆದುಬಂದ ಧಾರ್ಮಿಕ ವಿಚಾರದಲ್ಲಿ ದಿಢೀರ್ ಬದಲಾವಣೆಯನ್ನು ಬಯಸುವುದು ಮೂರ್ಖತನವಾಗುತ್ತದೆ. ನಿಧಾನವಾಗಿ, ಮುಂದೊಂದು ದಿನ ಮನುಷ್ಯ ಮನುಷ್ಯನನ್ನು ಅರ್ಥಮಾಡಿಕೊಳ್ಳುವುದರ ಮೂಲಕ "ಜಾತಿ ಸಂಕರ"ವಾಗುತ್ತದೆಂಬ ಸಂಪೂರ್ಣ ವಿಶ್ವಾಸ ನನಗಿದೆ. ನಮ್ಮ ಸಮಾಜದಲ್ಲಿ ಒಬ್ಬರನ್ನೊಬ್ಬರು ಅರ್ಥೈಸಿಕೊಂಡಾಗ ಮತ್ತು ಮಾನವರೊಳಗೆ ಸಮಾನತೆಯ ಅರಿವು ಮೂಡಿದಾಗ ಮತ್ತು ಮೂಡಿಸಿದಾಗ (ಇದು ಶಾಂತಿಯುತವಾಗಿರಬೇಕು) ಯಾವುದೂ ಅಸಾಧ್ಯವಾದುದಿಲ್ಲ. ಒತ್ತಾಯ ಪೂರ್ವಕ ಮತ್ತು ಕ್ರಾಂತಿಕಾರಕ ಈ ಸಹಪಂಕ್ತಿ ಭೋಜನ ಕೂಟ ಜಾತಿ ವ್ಯವಸ್ಥೆಯನ್ನು ತೊಡೆದು ಹಾಕುವಲ್ಲಿ ಸಮರ್ಥವಾಗಲಾರದು.

ಪ್ರಸ್ತುತ ಪರಿಸ್ಥಿತಿಯಲ್ಲಿ ಸಹಪಂಕ್ತಿ ಭೋಜನ ನಿಜವಾಗಿಯೂ ಭಾರೀ ಎದುರಿಸಬೇಕಾದ ಸಮಸ್ಯೆಯಾಗಿರಲಿಲ್ಲ, ಹಾಗೆ ಎದುರಿಸಬೇಕಾದ ಹತ್ತಾರು ವಿಚಾರಗಳಲ್ಲಿ ಇದೂ ಒಳಗೊಂಡಿದೆ ಅಷ್ಟೆ. (ಇಲ್ಲಿ ಚಾವಲ್ಮನೆ ವೆಂಕಟಪ್ಪನಾಯ್ಕರ ಪತ್ರವನ್ನು ಸ್ಮರಿಸಬಹುದಾಗಿದೆ.) ಇದು ನಿಜವಾಗಿಯೂ ಸಾಮರಸ್ಯದಿಂದ ಕೂಡಿದ ಶಾಂತಿಯುತ ಆಂದೋಲನವಲ್ಲ. ಇದು ಒಂದು ಮನೆಯಲ್ಲೇ ಎರಡು ಅಭಿಪ್ರಾಯ ಉಂಟುಮಾಡಿದೆ.

ಆದ್ದರಿಂದ ಎಲ್ಲರ ಮನವನ್ನೂ ಒಪ್ಪಿಸಿ ಶಾಂತಿಯುತವಾಗಿ, ಎಲ್ಲರ ಸಹಕಾರದಿಂದ ಒಗ್ಗೂಡಿ, ಯಾರನ್ನೂ ಬಯ್ಯದೆ, ಹೊಗಳದೆ, ಎಲ್ಲರ ವಿಶ್ವಾಸವನ್ನೂ ಗಳಿಸುವಂತಹ ಕ್ರಾಂತಿ ರಹಿತವಾಗಿ ಶಾಂತಿಯುತವಾಗಿ, ಎಲ್ಲರನ್ನೂ ಏಕಮನಸ್ಸಿನಿಂದ ಪ್ರೇರೇಪಿಸುವ ಒಂದು ವೇದಿಕೆ ಅಗತ್ಯವಾಗಿದೆ. ಸ್ವಾರ್ಥ ಲಾಲಸೆಯನ್ನೂ ಬಿಟ್ಟು ಇಂಥ ವೇದಿಕೆ ರಚಿಸುವುದಾದರೆ ನನ್ನ ತುಂಬು ಪ್ರೋತ್ಸಾಹವಿದೆ. ಎಲ್ಲರ ಅಭಿಪ್ರಾಯಗಳನ್ನು ಒಂದುಗೂಡಿಸುವಲ್ಲಿ ಸಮರ್ಥವಾದ ವೇದಿಕೆ ರಚಿತವಾಗಲೆಂದು ಹಾರೈಸೋಣ.

—ಎ.ಆರ್. ಭವಾನಿಶಂಕರ್,
ಕಲ್ಲುದೇವಸ್ಥಾನ, ಶೃಂಗೇರಿ.

# "ಸಹಪಂಕ್ತಿ ಭೋಜನ ಹೇಗಾದೀತು?"

ಸಹಪಂಕ್ತಿ ಭೋಜನಕ್ಕೆ ಸಂಪೂರ್ಣ ಬೆಂಬಲವಿರುವ ನನ್ನದೊಂದೆರಡು ಮಾತು: ಕೇವಲ ಋತ್ವಿಜರನ್ನು ದೂಷಿಸುವುದರಿಂದಲೇ ಈ ಸಮಸ್ಯೆ ಬಗೆಹರಿಯಲಾರದು. ಅದಕ್ಕೆ ತಾಳ್ಮೆ ಅವಶ್ಯಕ. ದುಡುಕುತ್ತ ರೋಷದಿಂದ, ಬ್ರಾಹ್ಮಣರ ಬಗ್ಗೆ ಕೆಟ್ಟ ಅಭಿಪ್ರಾಯದಿಂದ ಏನೇನೋ ಹೇಳುತ್ತ ಹೋದರೆ ಅದು ಘರ್ಷಣೆ ಅಥವಾ ಹೋರಾಟಕ್ಕೆ ಎಡೆಮಾಡಿಕೊಡುತ್ತದೆ. ಎಲ್ಲೆಡೆಯಲ್ಲೂ ಈ ಜಾತಿ ಪದ್ಧತಿಯು ನಿರ್ಮೂಲವಾಗುತ್ತಿರುವಂತೆ ಇಲ್ಲಿಯೂ ಆಗುವುದೆಂಬ ನಂಬಿಕೆ ನನಗಿದೆ.

ಶೂದ್ರರು ಹರಿಜನರನ್ನು ದೂರ ಮಾಡುವುದೇಕೆ? ಮೊದಲು ಹರಿಜನರೊಡಗೂಡಿ ಬಂದು ನಂತರ "ಸಹಪಂಕ್ತಿ ಭೋಜನ"ಕ್ಕೆ ಋತ್ವಿಜರನ್ನು ಒಪ್ಪಿಸಬಹುದಲ್ಲ?

20.4.86ರ ಸಂಚಿಕೆಯಲ್ಲಿ ಪ್ರಕಟಪಡಿಸಲ್ಪಟ್ಟ "ವೇದ ವಿದ್ಯೆ ಕಲಿತವರ ನಯವಂಚಕತನ" ಬರೆದ ಎಚ್.ಸುಂದರರಾವ್ ಇವರಿಗೆ ವೇದ ವಿದ್ಯೆಯ ಗಂಧವಿದೆಯೆ? "ವೇದ" ಎಂಬೆರಡಕ್ಷರವನ್ನರಿತಿರಬಹುದು. ಈ ಎರಡಕ್ಷರದಿಂದ ಅದರ ಆಂತರಿಕ ಮಹತ್ವವೆಲ್ಲವೂ ಅರಿವಾಗಲಾರದು. ವೇದ ಕಲಿತವರು ಅದಕ್ಕೆ ಸರಿಯಾಗಿಯೇ ನಡೆಯುತ್ತಿದ್ದಾರೆಯೇ ವಿನಃ 'ನಯವಂಚಕತನ' ಮಾಡಿಲ್ಲ.

ಆದ್ದರಿಂದ ವೇದವನ್ನು ಸಂಪೂರ್ಣ ಅಭ್ಯಸಿಸಿ ನಂತರ ಅದರ ವಿಷಯದಲ್ಲಿ ವೇದ ಬ್ರಾಹ್ಮಣರು ತಪ್ಪಾಗಿ ನಡೆದಿದ್ದಲ್ಲಿ ಆಗ ಅವರು ದೂಷಿಸಬಹುದಿತ್ತೆಂದು ನನ್ನ ಅನಿಸಿಕೆ. ಅವರು ವೇದದ ಮಹತ್ವವನ್ನು ತಿಳಿದದ್ದೇ ಆಗಿದ್ದರೆ ವೇದ ಬ್ರಾಹ್ಮಣರನ್ನು ಮೂದಲಿಸುತ್ತಿರಲಿಲ್ಲ.

ಹಾಗೆಯೇ ಅವರು– ಸ್ನಾನ ಮಾಡದವರೊಡನೆ ಕುಳಿತು ಊಟ ಮಾಡಲು ಇಷ್ಟವಿಲ್ಲದವರು ತಮ್ಮ ತಮ್ಮ ಮನೆಗಳಲ್ಲೇ ಕುಳಿತು ಉಣ್ಣಲಿ ಎಂದು ತಿಳಿಸಿದ್ದಾರೆ. ಹಾಗೆ ಒಟ್ಟಿಗೆ ಕುಳಿತು ಊಟ ಮಾಡಲು ಇಷ್ಟವಿಲ್ಲದವರೇ ಇದರ ವಿರೋಧಿಗಳಾಗಿರುವಾಗ ಅವರು ಊಟಕ್ಕೇ ಬಾರದೆ ಮನೆಯಲ್ಲೇ ಊಟ ಮಾಡಿದರೆ ಆಗ "ಸಹಪಂಕ್ತಿ ಭೋಜನ" ಹೇಗಾದೀತು?

ನಾನೂ ಜಾತಿ ನಿರ್ಮೂಲನ ಕಾರ್ಯ ಕೈಗೊಂಡಿದ್ದೇನೆ. ಆದರೆ ವೇದ ಮತ್ತು ಋತ್ವಿಜರನ್ನು ದೂಷಿಸುವುದನ್ನೇ ಆಧಾರವಾಗಿ ಇಟ್ಟುಕೊಂಡಿಲ್ಲ.

—ಟಿ.ವಿ. ಶ್ರೀಮೂರ್ತಿ,
ವೈಕುಂಠಪುರ, ಶೃಂಗೇರಿ.

# "ಚೌಡೇಶ್ವರಿ ಹರಕೆ ದಿನ ಹಲ್ಲೆ ನಡೆಸಿದರು"

ತಾ|| 22–4–86ರಂದು ನಮ್ಮೂರಿನ ಚೌಡೇಶ್ವರಿ ದೇವಸ್ಥಾನದಲ್ಲಿ ಹರಕೆ ಹಬ್ಬ ನಡೆದಾಗ ಅಲ್ಲಿನ ಭಕ್ತರಾದ ನಾವುಗಳೆಲ್ಲರೂ ಪ್ರತಿ ವರ್ಷದಂತೆ ಹರಕೆ–ಹಣ್ಣು ಕಾಯಿಗೆ ಹೋಗಿದ್ದೆವು. ಆಗ ಅಲ್ಲಿ ಎಂಥದೋ ಬಗೆಯ ಇಸ್ಪೀಟ್ ಜೂಜಿನಲ್ಲಿ ಭದ್ರ ಎಂಬ ತಮಿಳರವನು ಒಂದಿಬ್ಬರು ಹುಡುಗರಿಗೆ ಮೋಸ ಮಾಡಿದಾಗ ಅಲ್ಲಿ ನೋಡುತ್ತ ನಿಂತಿದ್ದ ನಮ್ಮ ಕೇರಿಯ ರಾಮಣ್ಣ ಎಂಬವರು "ಯಾಕೆ ಮೋಸ ಮಾಡುತ್ತಿ?" ಎಂದು ಕೇಳಿದ್ದಕ್ಕೆ ಅಲ್ಲೇ ಇದ್ದ ಪ್ರಕಾಶಗೌಡ, ಶೇಖರೇಗೌಡ, ಉಮೇಶ ಗೌಡ, ಶ್ರೀನಿವಾಸಗೌಡ, ಮುಂತಾದವರು ರಾಮಣ್ಣನ ಮೇಲೆ ಹಲ್ಲೆ ನಡೆಸಿದರು ಉಡಿಯೊಳಗೆಲ್ಲ ಎಳೆದುಕೊಂಡು ಹೋಗಿ ಹೊಡೆಯತೊಡಗಿದರು. ಆಗ ನಮ್ಮ ಕೇರಿಯ ಜನ್ನ ಎಂಬ ಯುವಕ ಯಾರಿಗೆ ಹೊಡೆಯುವುದೆಂದು ಕೇಳಿ, 'ರಾಮಣ್ಣನಿಗೆ ಯಾಕೆ ಹೊಡೆಯುತ್ತಾರಂತೆ?' ಎನ್ನುತ್ತಿದ್ದಂತೆ ಸಮೀಪದಲ್ಲಿದ್ದ ಲೋಕು, ಕಿನ್ನಿಗ, ಸಂಜೀವ, ಮೈಲಾರಪ್ಪ ಮುಂತಾದ ಕೆಲವರು ಜನ್ನನ ಮೇಲೆ ತೀವ್ರ ಹಲ್ಲೆ ನಡೆಸಿ, ಆತನ ಅಣ್ಣ ಆನಂದ, ತಂದೆ ಬೆಳ್ಳಯ್ಯ ಮತ್ತು ಬೆಳ್ಳಿ ಎಂಬವರಿಗೆ ಥಳಿಸಿದರು. ಸಂಜೀವ ಖಾಲಿ ಬಾಟ್ಲಿಯಿಂದ ಜನ್ನನಿಗೆ ಹೊಡೆಯುವಾಗ ತಪ್ಪಿಸಲು ಬಂದ ಕೆ. ಸಿ. ನಿಜಯಗೌಡರಿಗೆ ಕೈಗೆ ಹೊಡೆತ ಬಿದ್ದು ಗಾಯವಾಯಿತು.

ಹಿಂದೆಂದೂ ಈ ಹಬ್ಬದ ಹೊತ್ತಿಗೆ ಬ್ರಾಂದಿ, ಸಾರಾಯಿ ಮಾರುತ್ತಿರಲಿಲ್ಲ. ಆದರೆ ಈ ವರ್ಷ ಜಯಪುರದ ನವೀನ್ ವೈನ್ಸ್ ಬಾರ್‌ನ ರಾಮದಾಸ್ 10 ಬಾಕ್ಸ್ ಬ್ರಾಂದಿಯನ್ನೂ ಚಿಕ್ಕೇಗೌಡರ ಮಗ ಪ್ರಕಾಶಗೌಡ ಎಂಬವರು ಕಳ್ಳ ಭಟ್ಟಿ ಸರಾಯಿಯನ್ನೂ ತಂದು ಮಾರಿದ್ದರಿಂದ ನಮ್ಮ ಕೇರಿಯವರು ಅಷ್ಟಾಗಿ ಯಾರೂ ಕುಡಿಯದಿದ್ದರೂ ಉಳಿದ ಎಲ್ಲಾ ಜಾತಿಗಳವರೂ ಬೇಕು ಬೇಕಾದವರೆಲ್ಲ ಕುಡಿದುದೇ ಈ ಗಲಾಟೆಗಳಿಗೆ ಕಾರಣವಾಗಿತ್ತು. ರಾಮದಾಸ್ ಅವರೇ, "ಗೌಡರ ಮಕ್ಕಳೆಲ್ಲರೂ ಸರೀ ಕುಡಿದುಕೊಂಡು ಹೊಲೆಯರಿಗೆ ಹೆಂಗಸರು ಮಕ್ಕಳಿಗೆಲ್ಲಾ ಹೊಡೆದರು" ಎಂಬುದಾಗಿ ಜಯಪುರದಲ್ಲಿ ಪ್ರಚಾರ ಕೂಡ ಮಾಡಿದ್ದಾರೆ.

ಈ ಗಲಾಟೆಯಾದ ನಂತರ ರಾಮಣ್ಣನ ಮೇಲೆ ಯಾರೋ ವಿನಾಕಾರಣ ದೂರು ಕೊಟ್ಟು, ಬಾಳೆಹೊನ್ನೂರಿನ ಪೋಲೀಸರು ಅವರನ್ನು ಠಾಣೆಗೆ ಕರೆದುಕೊಂಡುಹೋಗಿ ಒಮ್ಮೆ ಬಿಟ್ಟು, ಪುನಃ ಮರುದಿನ ಜಯಪುರ ದಫೇದಾರರು ದೂರು ಕೊಟ್ಟದ್ದರೆಂದು ಕರೆದುಕೊಂಡುಹೋಗಿ 28ರಂದು ಬಿಟ್ಟಿದ್ದಾರೆ. ಜನ್ನ, ಆನಂದ ಇವರ ಮೇಲೆ ನಡೆದ ಹಲ್ಲೆ ಬಗ್ಗೆ ಬಾಳೆಹೊನ್ನೂರು ಠಾಣಾಧಿಕಾರಿಗಳಿಗೆ ಕೊಟ್ಟ ದೂರನ್ನು ಅವರು ಜಯಪುರ ದಫೇದಾರರಿಗೆ ಕಳಿಸಿದರೆ ಅವರು ಏನೂ ಕ್ರಮ ತೆಗೆದುಕೊಂಡಿಲ್ಲ.

ಹಿಂದೆಲ್ಲ ನಮ್ಮಗಳಿಗೆ ಬಹಳ ಉಪಕಾರಿಯಾಗಿದ್ದ, ಈ ದೇವಸ್ಥಾನದ ಮುಖ್ಯಸ್ಥರಾದ ಹೆಗ್ಗಡ್ಡೆ ತಮ್ಮೇಗೌಡರು ಸಹ ಈ ಗಲಾಟೆಗಳ ವೇಳೆಗೆ ನ್ಯಾಯ ಕೊಡಲಿಲ್ಲ. ನಾವು ಹೋಗಿ ಅವರಿಗೆ ಹೇಳಿದಾಗ, "ನೀವು ಇಲ್ಲಿಗ್ಯಾಕೆ ಬಂದಿರಿ?" ಎಂದು ನಮಗೇ ಕೇಳಿದರು. ಹಲ್ಲೆ ನಡೆಸಿದ ಕಿನ್ನಿಗ, ಲೋಕು, ಶ್ರೀನಿವಾಸ ಗೌಡ, ಮೈಲಾರಪ್ಪ, ಇವರುಗಳೆಲ್ಲ ಅವರ ಮನೆಯ ಆಳುಗಳೇ. ಸಂಜೀವ ಮಾತ್ರ ನಮ್ಮ ಕೇರಿಯವನೇ ಆಗಿಯೂ ನಮಗೇ ಕೇಡು ಮಾಡಿದ್ದಾನೆ.

ಇನ್ನು ಮುಂದಾದರೂ ಊರಿನಲ್ಲಿ ಇಂಥ ಗಲಾಟೆ, ಹೊಡೆದಾಟಗಳಿಗೆ ಅವಕಾಶವಾಗದಂತೆ ಊರಿನ ಮುಖಂಡರುಗಳು ವ್ಯವಸ್ಥೆ ಮಾಡಲೆಂದು ಆಶಿಸುತ್ತೇವೆ.

—ಹರಿಜನ ನಿವಾಸಿಗಳು,
ಸಣ್ಣಕೇರಿ, ಜಯಪುರ.

## ಹನುಮನಿಗೆ ಕಾಯ್‌ತುರಿ ಅಲಂಕಾರ

ರಾಮಸೇನಾ ಸಮಿತಿಯವರು ರಾಮೋತ್ಸವದ ನಂತರ ಹನುಮೋತ್ಸವ ಏರ್ಪಡಿಸಿದ್ದರು. ಈ ಪ್ರಯುಕ್ತ ಮಾರುತಿ ಭಜನಾ ಮಂಡಳಿಯವರು ವೀರಾಂಜನೇಯಮೂರ್ತಿಗೆ ಪ್ರಥಮ ಬಾರಿಗೆ ಕಾಯ್‌ತುರಿ ಅಲಂಕಾರವನ್ನು ಏ. 27ರಂದು ಏರ್ಪಡಿಸಿದ್ದರು. ಸುಮಾರು 10–12 ಕಾಯಿಹೋಳುಗಳ ತುರಿಯಿಂದ ಸುಂದರವಾಗಿ ಕಾಣುತ್ತಿದ್ದ ವಿಗ್ರಹ ಬಹು ಜನರನ್ನು ಆಕರ್ಷಿಸಿತು.

—ಮಹಾಬಲ, ನ.ರಾ. ಪುರ

## 202 ಜನ ರೈತರಿಗೆ 5 ಲಕ್ಷ ರೂ. ಸಾಲ ವಿತರಣೆ

ಶೃಂಗೇರಿ: ಇಲ್ಲಿನ ವ್ಯವಸಾಯ ಸೇವಾ ಸಹಕಾರ ಸಂಘ ಮಂಜೂರು ಮಾಡಿದ 5 ಲಕ್ಷ 18 ಸಾವಿರ ರೂ. ಸಾಲವನ್ನು 202 ಜನರಿಗೆ ಸಚಿವ ಗೋವಿಂದ ಗೌಡರು ವಿತರಿಸಿದರು. ಸದರಿ ಸಂಘವು ನೂರಕ್ಕೆ ನೂರು ಸಾಲ ವಸೂಲಿ ಮಾಡಿದ ಬಗ್ಗೆ ಅವರು ಪ್ರಶಂಸಿಸಿದರು.

ಕಲ್ಕುಳಿ ಗ್ರಾಮದಲ್ಲಿ 6 ಕಾಮಧೇನು ಸಗಣಿ ಅನಿಲ ಘಟಕಗಳನ್ನು ಉದ್ಘಾಟಿಸಿದ ಅವರು 12 ಜೋಡಿ ಸಾಮೂಹಿಕ "ತಾಳಿ ಭಾಗ್ಯ" ಮದುವೆ ಸಮಾರಂಭದಲ್ಲೂ ಪಾಲ್ಗೊಂಡಿದ್ದರು

ಸಂಪಾದಕ, ಮುದ್ರಕ, ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು: ದೀವಟಿಗೆ ಅಚ್ಚು ಕೂಟ, ಕೊಪ್ಪ.

# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಆರ್‌ಎನ್‌ಎಸ್ - 19

4ನೇ ವರ್ಷ 36ನೇ ಸಂಚಿಕೆ ಕೊಪ್ಪ 11-5-1986 ಭಾನುವಾರ ಬೆಲೆ 20 ಪೈಸೆ


## ಹಲವೆಡೆ ಅರಣ್ಯ ಇಲಾಖೆ ಅಧಿಕಾರಿಗಳ ದಾ...

ಕೊಪ್ಪ: ಇಲ್ಲಿನ ಅರಣ್ಯ ವಿಭಾಗಾಧಿಕಾರಿ ವಿನಯ್ ಲೂಥ್ರ ಮತ್ತು ಅವರ ಸಿಬ್ಬಂದಿ ಈಚೆಗೆ ಹಲವೆಡೆ ಅರಣ್ಯ ಲೂಟಿಯ ವಿರುದ್ಧ ಯಶಸ್ವೀ ದಾಳಿಗಳನ್ನು ನಡೆಸಿದ್ದಾರೆ.

### ಅಲಗೇಶ್ವರದಲ್ಲಿ

ಅಲಗೇಶ್ವರ ಎಸ್ಟೇಟಿನಲ್ಲಿ ಕಾರ್ಮಿಕರ ಸಾಲು ಮನೆಗಳನ್ನು ಕಟ್ಟಲು ನಾಟಾಕ್ಕಾಗಿ ಮತ್ತು ತಮ್ಮ ಟೀ ಕಾರ್ಖಾನೆಗೆ ಸೌದೆಗಾಗಿ ನೆರೆಯ ಕಾಡಿನಲ್ಲೂ ಹಾಗೂ ಪರವಾನಗಿ ಇಲ್ಲದೆ ತಮ್ಮ ಜಮೀನಿನಲ್ಲೂ ನಾಟಾ, ಸೌದೆ ಕಡಿದುದನ್ನು ಮೇ 5ರಂದು ನಡೆಸಿದ ದಾಳಿಯಿಂದ ಪತ್ತೆ ಹಚ್ಚಿ ಸರ್ಕಾರಿ ಜಾಗದಿಂದ ಕಡಿದುದನ್ನು ಮುಟ್ಟುಗೋಲು ಹಾಕಿಕೊಂಡು 30 ಸಾವಿರ ರೂ. ಜುಲ್ಮಾನೆ ಹಾಕಿದ್ದಾರೆ.

ಟೀ ಕಾರ್ಖಾನೆಯಲ್ಲಿ ಇನ್ನೊಂದು ತಿಂಗಳೊಳಗಾಗಿ **ಸೌದೆ ಬದಲು ಕಲ್ಲಿದ್ದಲು ಬಳಸುವ** ಫರ್ನೇಸ್ ಸ್ಥಾಪಿಸಲು ಮಾಲೀಕರು ಭರವಸೆ ಕೊಟ್ಟ ಮೇರೆಗೆ ಕಾರ್ಖಾನೆಯನ್ನು 'ಸೀಲ್' ಮಾಡುವ ಕ್ರಮವನ್ನು ಕೈಬಿಡಲಾಯಿತೆಂದು ಡಿಎಫ್‌ಒ 'ಮುಂಜಾವು'ಗೆ ತಿಳಿಸಿದರು.

### ಹಸಿ ಬಿದಿರಿಗೆ ಜುಲ್ಮಾನೆ

ಚಿಕ್ಕಮಗಳೂರು ವಿಭಾಗದಿಂದ ಭದ್ರಾವತಿ ಕಾಗದ ಕಾರ್ಖಾನೆಗೆ ಬಿದಿರು ಸಾಗಿಸುತ್ತಿದ್ದ ಲೋಡಿನಲ್ಲಿ ಹಸಿ ಬಿದಿರುಗಳೂ ಇದ್ದುದನ್ನು ತಡೆದು ಜುಲ್ಮಾನೆ ಹಾಕಲಾಯಿತು.

### ಗಂಧ ಸಾಗಣೆ ಗುಮಾನಿ : ಕಾರು ನಾಪತ್ತೆ

ಮೇ 8ರಂದು ನಿಲುವಾಗಿಲಿನ ಬಳಿಯಿಂದ ಕಾರೊಂದರಲ್ಲಿ ಗಂಧದ ಸಾಗಣೆಯಾಗುತ್ತಿದೆಯೆಂಬ ಸುಳಿವಿನ ಮೇಲೆ ಅಲ್ಲಿಗೆ ಹೋದರೆ ಆ ಕಾರು ತಪ್ಪಿಸಿಕೊಂಡು ಹೊರಟು ಹೋಗಿತ್ತು. ಕಾರ್ಕಳದವರೆಗೆ ಹೋದರೂ ಸಿಕ್ಕಲಿಲ್ಲ. ಮಂಗಳೂರು ಪೋಲೀಸರಿಗೆ ಸಂದೇಶ ಕಳಿಸಲಾಯಿತಾದರೂ ಪ್ರಯೋಜನವಾಗಲಿಲ್ಲ.

### ಗಂಧ ಸಹಿತ ಲಾರಿ ವಶ

ಕೊಪ್ಪ ಸಮೀಪ ಲಾರಿಯೊಂದರಲ್ಲಿ ಸಾಗಿಸುತ್ತಿದ್ದ 30 ಸಾವಿರ ರೂ. ಬೆಲೆಯ ಗಂಧದ ತುಂಡುಗಳನ್ನು ಲಾರಿ ಸಹಿತ ವಶಪಡಿಸಿಕೊಳ್ಳಲಾಗಿದ್ದು, ಆರೋಪಿಗಳು ಪರಾರಿಯಾಗಿದ್ದಾರೆಂದು ವರದಿಯಾಗಿದೆ.

## ಕೊಪ್ಪ ಆಸ್ಪತ್ರೆಯಲ್ಲಿ ಪ್ರತೀ ಬುಧವಾರ ಸಂತಾನ ಹರಣ ಶಸ್ತ್ರ ಚಿಕಿತ್ಸೆ

**ಕೊಪ್ಪ:** ಇಲ್ಲಿನ ಸಾರ್ವಜನಿಕ ಆಸ್ಪತ್ರೆಯಲ್ಲಿ ಪ್ರತೀ ಬುಧವಾರ ಕುಟುಂಬ ಯೋಜನೆ ಶಸ್ತ್ರ ಚಿಕಿತ್ಸೆಗಳನ್ನು ಮಾಡಲಾಗುತ್ತಿದೆ. ಅರ್ಹ ದಂಪತಿಗಳು ಇದರ ಪ್ರಯೋಜನ ಪಡೆದುಕೊಳ್ಳಬಹುದೆಂದು ವೈದ್ಯಾಧಿಕಾರಿಗಳು ತಿಳಿಸಿದ್ದಾರೆ.

### 160 ಕ್ವಿಂ. ಬಿತ್ತನೆ ಬೀಜ

**ಕೊಪ್ಪ** ತಾ॥ನಲ್ಲಿ ಅರ್ಹ ರೈತರಿಗೆ ವಿತರಿಸುವುದಕ್ಕಾಗಿ 160 ಕ್ವಿಂಟಾಲ್ ಬಿತ್ತನೆ ಬೀಜವನ್ನು ಸಿದ್ಧವಾಗಿಟ್ಟುಕೊಳ್ಳಲಾಗಿದೆ. ರೈತರು ಇದರ ಪ್ರಯೋಜನ ಪಡೆದುಕೊಳ್ಳಬೇಕೆಂದು ಸಹಾಯಕ ಕೃಷಿ ನಿರ್ದೇಶಕರು ತಿಳಿಸಿದ್ದಾರೆ.

## ಪ್ರವಾಸಿ ಕೇಂದ್ರವಾಗಿ ಶೃಂಗೇರಿ ಅಭಿವೃದ್ಧಿ : ವಸತಿಗೃಹ ಕಟ್ಟಲು 5.5 ಲಕ್ಷ ರೂ. ಮಂಜೂರು

(ನಮ್ಮ ಪ್ರತಿನಿಧಿಯಿಂದ)

ಶೃಂಗೇರಿ: ಶೃಂಗೇರಿಯನ್ನು ಪ್ರವಾಸಿ ಕೇಂದ್ರವನ್ನಾಗಿ ಘೋಷಿಸಿರುವುದರಿಂದ ಇಲ್ಲಿನ ಮಾರುತಿ ಬೆಟ್ಟದಲ್ಲಿ ವಸತಿ ಗೃಹ ಕಟ್ಟಲು 2 ಎಕರೆ ಜಾಗವನ್ನೂ 5.5 ಲಕ್ಷ ರೂ.ಗಳನ್ನೂ ಮಂಜೂರು ಮಾಡಲಾಗಿದೆಯೆಂದು ಸಚಿವ ಗೋವಿಂದಗೌಡರು ಈಚೆಗೆ ಇಲ್ಲಿ ತಿಳಿಸಿದರು.

ಮೇ 5ರಂದು ಇಲ್ಲಿನ ವಿದ್ಯಾನಗರದಲ್ಲಿ ನೂತನ ಗ್ರಂಥಾಲಯ ಕಟ್ಟಡವನ್ನು ಉದ್ಘಾಟಿಸಿ ಮಾತನಾಡುತ್ತಿದ್ದ ಅವರು ಸುಮಾರು 25 ವರ್ಷಗಳಿಂದ ನನೆಗುದಿಗೆ ಬಿದ್ದಿದ್ದ ಇಕ್ಕಡ್ಲು ಹಳ್ಳ ಸೇತುವೆಗೆ ಸರ್ಕಾರ 6.5 ಲಕ್ಷ ರೂ.ಗಳನ್ನು ಮಂಜೂರು ಮಾಡಿದೆ ಎಂದರು.

ಅಧ್ಯಕ್ಷತೆ ವಹಿಸಿದ್ದ ಜಿಲ್ಲಾಧಿಕಾರಿಗಳು **ಈ** ವರ್ಷ ಕೊಪ್ಪ, ನ.ರಾ. ಪುರ, ತರೀಕೆರೆ ಮತ್ತು ಆಲ್ದೂರಿನಲ್ಲಿ ಗ್ರಂಥಾಲಯ ಕಟ್ಟಡವನ್ನು ಕಟ್ಟಲಾಗುವುದೆಂದರು.

ಅಣ್ಣಯ್ಯ ಹೆಗ್ಡೆ, ಮಾಗಾ ಚಂದ್ರಶೇಖರ್, ಕಚ್ಚೋಡಿ ಶ್ರೀನಿವಾಸ್ ಮುಖ್ಯ ಅತಿಥಿಗಳಾಗಿದ್ದರು.

## ಏಲಕ್ಕಿ ಸಸಿ ಮಾರಾಟ

**ಕೊಪ್ಪ:** ಈ ತಾಲ್ಲೂಕಿನ ಬೆಳಗೊಳದಲ್ಲಿರುವ ಏಲಕ್ಕಿ ಮಂಡಳಿಯ ಸಸ್ಯ ಪಾಲನಾ ಕೇಂದ್ರದಲ್ಲಿರುವ ಮಲಬಾರ್ ಜಾತಿಯ ಏಲಕ್ಕಿ ಸಸಿಗಳನ್ನು ಅರ್ಜಿ ಸಲ್ಲಿಸಿರುವ ನೊಂದಾಯಿತ ಏಲಕ್ಕಿ ಬೆಳೆಗಾರರಿಗೆ ಮಾರಲಾಗುವುದು. 10 ತಿಂಗಳ ಎರಡೂವರೆ ಲಕ್ಷ ಸಸಿಗಳು, 22 ತಿಂಗಳ 9,500 ಸಸಿಗಳೂ ಇವೆ. ಅರ್ಜಿ ಫಾರಂ ಮತ್ತು ಹೆಚ್ಚಿನ ವಿವರಗಳನ್ನು ಸದರಿ ಕೇಂದ್ರದಲ್ಲಾಗಲೀ, ಮಂಡಳಿ ಕಚೇರಿಯಲ್ಲಾಗಲಿ ಪಡೆಯಬಹುದು.

## ದೇವನ್, ಬಸರಿಕಟ್ಟೆಗಳಲ್ಲಿ ಮೇದಿನ ಶತಮಾನೋತ್ಸವ

**ಕೊಪ್ಪ:** ಮೇ ದಿನಾಚರಣೆಯ 100ನೇ ವಾರ್ಷಿಕೋತ್ಸವವನ್ನು ಎ. ಐ. ಟಿ. ಯು. ಸಿ.ಯ ಕೊಪ್ಪ ತಾಲ್ಲೂಕು ಸಮಿತಿ ಆಶ್ರಯದಲ್ಲಿ ದೇವನ್ ಎಸ್ಟೇಟಿನಲ್ಲಿ ಮತ್ತು ಬಸರೀಕಟ್ಟೆಯಲ್ಲಿ ಆಚರಿಸಲಾಯಿತು.

ಕಾರ್ಮಿಕರ ಬೃಹತ್ ಮೆರವಣಿಗೆಗಳ ನಂತರ ನಡೆದ ಬಹಿರಂಗ ಸಭೆಗಳನ್ನುದ್ದೇಶಿಸಿ ಬಿ.ಕೆ. ಸುಂದರೇಶ್, ರೇಣುಕಾರಾಧ್ಯ ಎಸ್. ಆರ್. ರಾಮಚಂದ್ರ ಮುಂತಾದವರು ಮಾತನಾಡಿದರು.

ಎರಡೂ ಸಭೆಗಳಲ್ಲಿ ಕಾಡಮನೆ ಎಸ್ಟೇಟಿನ 'ಕ್ರಾಂತಿಕಾರೀ ಜನ ಜಾಗೃತಿ ತಂಡ'ದಿಂದ ಸಾಂಸ್ಕೃತಿಕ ಕಾರ್ಯಕ್ರಮ ಜರುಗಿ ಜನಮನ್ನಣೆ ಪಡೆಯಿತು.

## ಶ್ರಂಗೇರಿ – ಸಾಗರ ಬಸ್ : ಹಳ್ಳಿಗರ ಸ್ವಾಗತ

ಶೃಂಗೇರಿ: ಇಲ್ಲಿಂದ ಬೆಳಗ್ಗೆ 6-45ಕ್ಕೆ ಹೊರಟು ಆಗಳಗಂಡಿ, ದಯಂಬಳ್ಳಿ, ಬಿಳಿನಕೊಡಿಗೆ, ಉತ್ತಮೇಶ್ವರ, ಕೊಪ್ಪ, ತೀರ್ಥಹಳ್ಳಿ, ಹುಂಚ, ರಿಪ್ಪನ್‌ಪೇಟೆ ಮಾರ್ಗವಾಗಿ ಸಾಗರಕ್ಕೆ ಮಧ್ಯಾಹ್ನ 11-45ಕ್ಕೆ ಹಾಗೂ ಅಲ್ಲಿಂದ ಸಂಜೆ 4-30ಕ್ಕೆ ಹೊರಟು ರಾತ್ರಿ 9.30ಕ್ಕೆ ಇಲ್ಲಿಗೆ ತಲುಪುವಂತೆ ಭಾಗ್ಯಶ್ರೀ ಮೋಟಾರ್ಸ್‌ನವರು ಹೊಸದಾಗಿ ಆರಂಭಿಸಿರುವ ಬಸ್ ಸರ್ವೀಸನ್ನು ಈ ಹತ್ತಾರು ಹಳ್ಳಿಗಳ ಜನತೆ ಬಹಳ ಸಂಭ್ರಮದಿಂದ ಸ್ವಾಗತಿಸಿದ್ದಾರೆ.

ಬಸ್ ಸೌಕರ್ಯ ತೀರಾ ಕನಿಷ್ಠವಾಗಿರುವ ಈ ಹಳ್ಳಿಗಳಿಗೆ ಶೃಂಗೇರಿ, ಕೊಪ್ಪ, ತೀರ್ಥಹಳ್ಳಿಗೆ ನೇರ ಸಂಪರ್ಕ ಕಲ್ಪಿಸುವುದರ ಜೊತೆಗೆ ಸಾಗರದ ಮಾರುಕಟ್ಟೆಗೆ ಸಹ ಅತ್ಯಂತ ಅನುಕೂಲಕರವಾಗಿ ಸಂಪರ್ಕ ಕಲ್ಪಿಸುವುದರಿಂದ ಈ ಬಸ್ಸು ಈ ಭಾಗದ ಜನತೆಗೆ ಒಂದು ವರದಾನವಾಗಲಿದೆ ಎಂದು ರೈತರು ತಿಳಿಸಿದ್ದಾರೆ.

## ಶಾಂತಿಗಾಗಿ ಉರುಸ್ ಆಚರಣೆ

(ವರದಿ: ಕಲ್ಕುಳಿ ವಿಠಲ ಹೆಗ್ಡೆ)

ಶೃಂಗೇರಿ: ರಾಷ್ಟ್ರದ ಐಕ್ಯತೆ, ಸಮಗ್ರತೆ ಮತ್ತು ಶಾಂತಿಗಾಗಿ ಧರ್ಮಗುರುಗಳ ಪುಣ್ಯತಿಥಿ ಆಚರಿಸುವುದೇ ಉರುಸ್ ಎಂದು ದಾವಣಗೆರೆ ಕಾಲೇಜಿನ ಕನ್ನಡ ಉಪನ್ಯಾಸಕ ಬಾಷಾರವರು ಇಲ್ಲಿ ಹೇಳಿದರು.

ಸಂಸ್ಕೃತ ಮತ್ತು ಕನ್ನಡ ಈ ಎರಡೂ ಭಾಷೆಗಳಲ್ಲಿ ತುಂಬಾ ಚೆನ್ನಾಗಿ ಹಲವು ಧರ್ಮಗಳ ಸೂಕ್ತಿಗಳನ್ನು ಉದಹರಿಸಿದ ಅವರು, ಸಮಾಜದ, ದಲಿತರ ದಾರಿದ್ರ್ಯಕ್ಕೊಳಗಾದವರ ಸೇವೆ ಮಾಡುವುದೇ ಮುಸ್ಲಿಮರ ಕರ್ತವ್ಯ ಎಂದರು.

ಸಮಾರಂಭ ಉದ್ಘಾಟಿಸಿದ ಸಚಿವ ಗೋವಿಂದ ಗೌಡರು, "ಮನುಷ್ಯರಲ್ಲಿ ಗಂಡು-ಹೆಣ್ಣು ಎಂಬ ಎರಡೇ ಜಾತಿ ಇರುವುದು. ದೇವರು-ಧರ್ಮದ ವಿಚಾರದಲ್ಲಿ ಅವರವರ ಪ್ರೀತಿಗೆ ಒಪ್ಪಿದ ಆಚರಣೆಯನ್ನು ಅನುಸರಿಸುತ್ತಾರೆ. ಆದ್ದರಿಂದ ಭೇದ ಭಾವ ಸಲ್ಲದು. ಸರಿಯಾದ ಧರ್ಮದ ಅರಿವಿದ್ದವರು ದ್ವೇಷ ಕಾರುವುದಿಲ್ಲ" ಎಂದರು.

ಜಿಲ್ಲಾಧಿಕಾರಿಗಳು ಮತ್ತು ಹಲವು ಪ್ರಮುಖರು ಮುಖ್ಯ ಅತಿಥಿಗಳಾಗಿದ್ದರು. ತೀರ್ಥಹಳ್ಳಿಯ '3 ನಂ.' ಬೀಡಿ ಮಾಲೀಕ ಅಬ್ದುಲ್ ಖಾದರ್ ಸಾಹೇಬ್ ಅಧ್ಯಕ್ಷತೆ ವಹಿಸಿದ್ದರು.

ಕಳೆದ ವರ್ಷ ಗೋರಿ ಗುಡ್ಡದ ಬಗ್ಗೆ ತೆಗೆದುಕೊಳ್ಳಲಾಗಿದ್ದ ನಿರ್ಣಯವನ್ನು ಸರ್ವಾನುಮತದಿಂದ ಒಪ್ಪಲಾಯಿತು.

## ನಾಟಾ, ಸೌದೆ ಬಳಕೆಯ ಸಮೀಕ್ಷೆ: ಸಹಕಾರಕ್ಕೆ ಮನವಿ

ಕೊಪ್ಪ : ಹೆಚ್ಚುತ್ತಿರುವ ಅರಣ್ಯ ಉತ್ಪನ್ನಗಳ ಬೇಡಿಕೆಯನ್ನು ಸಮರ್ಪಕವಾಗಿ ಪೂರೈಸುವ ದೃಷ್ಟಿಯಿಂದ ಕರ್ನಾಟಕ ಸರ್ಕಾರದ ಕೋರಿಕೆ ಮೇರೆಗೆ ಭಾರತೀಯ ಅರಣ್ಯ ಸಮೀಕ್ಷೆ ಸಂಸ್ಥೆಯು ಚಿಕ್ಕಮಗಳೂರು ಜಿಲ್ಲೆಯಲ್ಲಿ ಉಪಯೋಗಿಸಲಾಗುತ್ತಿರುವ ನಾಟಾ ಮತ್ತು ಸೌದೆಯ ಬಳಕೆಯ ಸಮೀಕ್ಷೆಯನ್ನು ಕೈಗೊಂಡಿದೆ.

ಈ ಸಂಸ್ಥೆಯ ನಿಯೋಗ ಡಿ.ಎಫ್.ಓ. ಪ್ರತಾಪ್ ಸಿಂಗ್ ಗರ್ಗ್ ಅವರ ನೇತೃತ್ವದಲ್ಲಿ ಆಯ್ದ ಕೆಲವು ಹಳ್ಳಿಗಳಲ್ಲಿ ಕೆಲವು ಮನೆಗಳಿಗೆ ಭೇಟಿ ನೀಡಿ ಸಮೀಕ್ಷಿಸಲಿದೆ. ಆದ್ದರಿಂದ ಸಾರ್ವಜನಿಕರು ಈ ಸಮೀಕ್ಷೆಯ ಬಗ್ಗೆ ತಪ್ಪು ಕಲ್ಪನೆ ಹೊಂದದೆ, ಸದರಿ ನಿಯೋಗವು ಆಯ್ದ ಕೆಲವು ಮನೆಗಳಿಗೆ ಭೇಟಿ ನೀಡಿದಾಗ ಅಗತ್ಯವಾದ **ಮಾಹಿತಿ** ಪಡೆಯಲು ಅನುವು ಮಾಡಿ**ಕೊಡಬೇಕಾಗಿ** ಕೊಪ್ಪ ಅರಣ್ಯ ವಿಭಾಗಾಧಿಕಾರಿ **ವಿನಯ್** ಲೂಥ್ರ ವಿನಂತಿಸಿದ್ದಾರೆ.

## ಮಲೆನಾಡಲ್ಲಿ ಹೈನುಗಾರಿಕೆ: 'ಮುಂಜಾವು' ವರದಿ ಆಧರಿಸಿ ಡೈರಿ ಅಧ್ಯಕ್ಷರಿಗೆ ಸಚಿವರ ನಿರ್ದೇಶನ

ಕೊಪ್ಪ: ಕ್ಷೀರೋದ್ಯಮದ ಅಭಿವೃದ್ಧಿಗೆ ಮಲೆನಾಡು ಅತ್ಯಂತ ಪ್ರಶಸ್ತವಾಗಿದ್ದರೂ ಹಾಸನ ಡೈರಿ ಅಧಿಕಾರಿಗಳ ನಿರ್ಲಕ್ಷದಿಂದಾಗಿ ಹಾಲು ಉತ್ಪಾದಕರು ನಷ್ಟ ಅನುಭವಿಸುವಂತಾಗಿರುವ ಬಗ್ಗೆ 27.4.86ರ 'ಮುಂಜಾವು' ವರದಿಯೊಂದಿಗೆ ಕೊಪ್ಪ, ಗುಡ್ಡೇತೋಟ, ಬಿಳಾಲುಕೊಪ್ಪ ಮುಂತಾದೆಡೆಗಳ ಹಾಲು ಉತ್ಪಾದಕರು ಸಚಿವ ಗೋವಿಂದ ಗೌಡರನ್ನು ಭೇಟಿ ಮಾಡಿ ಚರ್ಚಿಸಿದರು.

ಅವರುಗಳಿಗೆ ಕೊಟ್ಟಿದ್ದ ಭರವಸೆಯಂತೆ ಸಚಿವರು ಬೆಂಗಳೂರಲ್ಲಿ ಡೈರಿ ನಿಗಮದ ಅಧ್ಯಕ್ಷರನ್ನು ಕರೆಸಿ ಅವರೊಂದಿಗೆ ವಿವರವಾಗಿ ಚರ್ಚಿಸಿದ್ದು, ಅವರು ಮ್ಯಾನೇಜಿಂಗ್ ಡೈರೆಕ್ಟರ್‌ರಿಗೆ ಸೂಕ್ತ ಸೂಚನೆಗಳನ್ನು ನೀಡುವುದಾಗಿ ತಿಳಿಸಿದ್ದಾರೆಂದು ಸಚಿವರು '**ಮುಂಜಾವು**'ಗೆ ತಿಳಿಸಿದ್ದಾರೆ.

## ಅಡಿಕೆ ಪೇಟೆ

**ಶಿವಮೊಗ್ಗ ತಾ॥ 8.5.86**

ಸರಕು : 2700-3105; ಬೆಟ್ಟೆ: 1700-1900; ಗೊರಬಲು : 1000-1049; ಕಾಳುಮೆಣಸು : 3900-4000

**ಸಾಗರ ತಾ॥ 7.5.1986**

ಸಿಪ್ಪೆ ಗೋಟು : ರೂ. 509 ರಿಂದ 709; ಚಾಲಿ : ರೂ. 1622ರಿಂದ 1839; ಆಪಿ : ರೂ. 2939ರಿಂದ 3319

# ಪ್ರಗತಿಯತ್ತ ಉತ್ತಮೇಶ್ವರ ಸ್ಟೇಟ್‌ಬ್ಯಾಂಕ್

(ವರದಿ: ಕೆ. ರಮೇಶ್)

ಉತ್ತಮೇಶ್ವರ: 1983ರ ಆಗಸ್ಟ್ 26ರಂದು ಆರಂಭವಾದ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಬೆಳವಿನಕೊಡಿಗೆ ಗ್ರಾಮಾಂತರ ಶಾಖೆಯು ಈ ಅವಧಿಯಲ್ಲಿ ಸರ್ವಾಂಗೀಣ ಪ್ರಗತಿಯನ್ನು ಸಾಧಿಸಿ ಮುನ್ನಡೆಯುತ್ತಿದೆ. ಈ ಪ್ರಗತಿಯ ಸಂಕ್ಷಿಪ್ತ ಚಿತ್ರಣ ಇಲ್ಲಿದೆ.

ಈ ಶಾಖೆಯ ಠೇವಣಿ ಸಂಗ್ರಹವು 1984ರಲ್ಲಿದ್ದುದರ ಒಂದೂವರೆ ಪಟ್ಟು (ಶೇ. 159.3) ಮತ್ತು ಸಾಲ ನೀಡಿಕೆ ಮೂರು ಪಟ್ಟು (ಶೇ. 329.6) ಹೆಚ್ಚಾಗಿದೆ.

1985ರ ಸ್ವಾತಂತ್ರ್ಯ ದಿನದಂದು 18 ಮಂದಿ ಹರಿಜನರು ಮತ್ತು ಇತರ ಬಡವರಿಗೆ ಶೇ. 4ರ ಬಡ್ಡಿ ದರದಲ್ಲಿ 18 ಸಾವಿರ ರೂ. ಸಾಲವನ್ನೂ, 48 ಜನ ಅತಿ ಸಣ್ಣ ರೈತರಿಗೆ 1.28 ಲಕ್ಷ ರೂ. ಸಾಲವನ್ನೂ ನೀಡಲಾಯಿತು. ಗ್ರಾಹಕ ಸೇವೆ ಸುಧಾರಿಸುವ ದಿಕ್ಕಿನಲ್ಲಿ ಅವರ ಸಲಹೆ ಮತ್ತು ದೂರುಗಳನ್ನು ಸ್ವೀಕರಿಸಲು ಗ್ರಾಹಕರ ಸಭೆಗಳನ್ನು ನಡೆಸಲಾಯಿತು.

1985ರಲ್ಲಿ 'ಇನ್ನೊವೇಟಿವ್ ಬ್ಯಾಂಕಿಂಗ್' ಕಾರ್ಯಕ್ರಮದಡಿ ಶೃಂಗೇರಿಯ ಧನ್ವಂತರಿ ಆಸ್ಪತ್ರೆಯ ತಜ್ಞವೈದ್ಯರುಗಳಾದ ಡಾ॥ ಜನಾರ್ಧನ ಅಂಕೋಲೇಕರ್ (ಸ್ತ್ರೀರೋಗ ತಜ್ಞರು) ಮತ್ತು ಡಾ॥ ಪ್ರಭಾಕರ ಹೇರಳೆಯವರನ್ನೂ, ಉತ್ತಮೇಶ್ವರದ ಡಾ॥ ಎಸ್. ಆರ್. ಕೋದಂಡರಾಮ್ ಇವರನ್ನೂ ಕರೆಯಿಸಿ, ಲಯನ್ಸ್ ಕ್ಲಬ್‌ನವರ ಜಂಟಿ ಆಶ್ರಯದಲ್ಲಿ ವೈದ್ಯಕೀಯ ಶಿಬಿರವನ್ನು ಏರ್ಪಡಿಸಲಾಯಿತು. ಸ್ವಾತಂತ್ರ್ಯೋತ್ಸವದಂದು ಶಾಲಾ ಮಕ್ಕಳಿಗೆ ಸ್ಥಳದಲ್ಲೇ ಚಿತ್ರ ಬರೆಯುವ ಸ್ಪರ್ಧೆಯನ್ನು ಏರ್ಪಡಿಸಿ ಬಹುಮಾನಗಳನ್ನು ನೀಡಲಾಯಿತು. ಪರಿಸರ ಸಂರಕ್ಷಣೆ ಹಾಗೂ ವನಮಹೋತ್ಸವದ ಅಂಗವಾಗಿ ಶೃಂಗೇರಿಯ ಅರಣ್ಯಾಧಿಕಾರಿಗಳು ಮತ್ತು ಗ್ರಾಮಸ್ಥರ ನೆರವಿನಿಂದ ಸುಮಾರು 3000 ಸಸಿಗಳನ್ನು ನೆಡಲಾಯಿತು.

ಕಳೆದ ವರ್ಷ 20 ಅಂಶಗಳ ಕಾರ್ಯಕ್ರಮದ ಅನ್ವಯ ಹಳ್ಳಿಯ ಜನರಿಗೆ ಉತ್ತೇಜನ ಕೊಟ್ಟು 4 ಸಗಣಿ ಅನಿಲ ಸ್ಥಾವರಗಳಿಗೆ ಬ್ಯಾಂಕು ಸಾಲ ನೀಡಿತು. ಈ ವರ್ಷ ಇನ್ನೂ 5 ಸ್ಥಾವರಕ್ಕೆ ಸಾಲ ನೀಡಲಾಯಿತು. ಸಾಲ ನೀಡಿಕೆಯಲ್ಲಿ ಮಹಿಳೆಯರಿಗೆ ಆದ್ಯತೆ ಕೊಡುವಲ್ಲಿ ಶಾಖೆಯು ಹೆಚ್ಚಿನ ಆಸಕ್ತಿ ವಹಿಸಿತು. 8 ಜನ ಮಹಿಳೆಯರಿಗೆ ಹೊಲಿಗೆ ಯಂತ್ರಗಳನ್ನು ಬಾಲವಿಕಾಸ ಯೋಜನೆಯನ್ವಯ ವಿತರಿಸಿದರೆ, 23 ಜನ ಮಹಿಳೆಯರಿಗೆ 'ಡ್ವಾಕ್ರಾ' ಯೋಜನೆಯಲ್ಲಿ ಮೇಣದ ಬತ್ತಿ ಹಾಗೂ ಸೋಪು ತಯಾರಿಕೆಗಾಗಿ 69,000 ರೂಪಾಯಿ ಸಾಲ ನೀಡುವ ಆಶ್ವಾಸನೆ ಕೊಡಲಾಗಿದೆ. 38 ಜನರಿಗೆ ಗ್ರಾಮೀಣ ಅಭಿವೃದ್ಧಿ ಯೋಜನೆಯಲ್ಲಿ 1 ಲಕ್ಷ ರೂ. ಸಾಲ ವಿತರಿಸಲಾಯಿತು. ಶಾಖೆಯು ಸ್ವಯಂ ಉದ್ಯೋಗ ಯೋಜನೆಯಲ್ಲೂ 15,000 ರೂಪಾಯಿ ಸಾಲ ಕೊಟ್ಟದ್ದು, ಇನ್ನೊಂದು ಸೀಗೆ ಪುಡಿ ಮಾಡುವ ಯಂತ್ರಕ್ಕೆ ಸಾಲ ಕೊಡುವ ಯೋಜನೆಯಲ್ಲಿದೆ.

ಈ ಎಲ್ಲಾ ಸಾಲಗಳಲ್ಲಿ ಶೇಕಡಾ 80 ರಷ್ಟು ಸಾಲ ಮರುಪಾವತಿಯಾಗಿದೆ.

ಈ ಎಲ್ಲಾ ಪ್ರಗತಿಯಲ್ಲಿ ಸಹಕರಿಸುತ್ತಿರುವ ಗ್ರಾಮಸ್ಥರು ಹಾಗೂ ವಿವಿಧ ಇಲಾಖೆಗಳ ಮತ್ತು ಸಂಘ ಸಂಸ್ಥೆಗಳ ಆಡಳಿತ ವರ್ಗದವರಿಗೆ ಬ್ಯಾಂಕಿನ ವ್ಯವಸ್ಥಾಪಕರು ಹಾಗೂ ಸಿಬ್ಬಂದಿ ವರ್ಗದವರು ಕೃತಜ್ಞತೆಯನ್ನು ಸೂಚಿಸಿದ್ದಾರೆ.

## ಸಾಮೂಹಿಕ ವಿವಾಹ

ಬಿಳಾಲ್‌ಕೊಪ್ಪ: ರಾಜ್ಯ ಸರ್ಕಾರದ ಮತ್ತು ಇಲ್ಲಿನ 'ಬಿಳಾಲ್‌ಕೊಪ್ಪ ಮೇರುತಿ ಜೇಸೀಸ್' ಸಂಯುಕ್ತ ಆಶ್ರಯದಲ್ಲಿ 'ತಾಳಿ ಭಾಗ್ಯ' ಯೋಜನೆಯನ್ವಯ ಮೇ 18ರಂದು ಸಾಮೂಹಿಕ ವಿವಾಹ ಏರ್ಪಡಿಸಲಾಗಿದೆ. ಸಚಿವ ಗೋವಿಂದ ಗೌಡರು ಮತ್ತು ಜಿಲ್ಲಾಧಿಕಾರಿಗಳು ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುತ್ತಾರೆ.

## ದಾಸಮಠ ರಥೋತ್ಸವ

ಕೊಪ್ಪ: ಇಲ್ಲಿನ ದಾಸಮಠ ಸಂಸ್ಥಾನದಲ್ಲಿ 2ನೇ ವರ್ಷದ ರಥೋತ್ಸವ ಮೇ 3ರಂದು ನಡೆಯಿತು. ಆದಿಚುಂಚನಗಿರಿ ಮಠಾಧೀಶರು ಕಾರ್ಯಕ್ರಮದಲ್ಲಿ ಭಾಗವಹಿಸಿ ಆಶೀರ್ವಚನ ನೀಡಿದರು. ಸುಮಾರು 2 ಸಾವಿರ ಜನರಿಗೆ ಅನ್ನ ಸಂತರ್ಪಣೆ ನಡೆಯಿತು. ಮೂರು ದಿನ ವಿಜೃಂಭಣೆಯಿಂದ ನಡೆದ ಜಾತ್ರೆಯ ಕೊನೇ ದಿನ ದೇವರ ಪಲ್ಲಕ್ಕಿ ಉತ್ಸವ ಕೊಪ್ಪ ಪಟ್ಟಣದೊಳಗೆ ನಡೆಯಿತು.

## ಕೃಷಿ ಮತ್ತು ಗ್ರಾ. ಬ್ಯಾಂಕ್ ಸಾಲ ಮೇಳ ಕಾರ್ಯಕ್ರಮ

ಬೊಮ್ಲಾಪುರ: ಕೊಪ್ಪ ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಬ್ಯಾಂಕ್ ಸಣ್ಣ ಮತ್ತು ಅತೀ ಸಣ್ಣ ರೈತರಿಗೆ ವಿವಿಧ ಯೋಜನೆಗಳಿಗಾಗಿ ನೀಡಿದ್ದ ಸುಮಾರು 3.5 ಲಕ್ಷ ರೂ. ಸಾಲಗಳನ್ನು ಸಚಿವ ಗೋವಿಂದ ಗೌಡರು ಮೇ. 6ರಂದು ಇಲ್ಲಿ ವಿತರಿಸಿದರು. ಅಧ್ಯಕ್ಷತೆ : ಡಿ.ಸಿ.ಸಿ. ಬ್ಯಾಂಕಿನ ಅಧ್ಯಕ್ಷ ಕೆ.ಎಂ. ಶ್ರೀನಿವಾಸ್, ಮುಖ್ಯ ಅತಿಥಿಗಳು: ಡಿ. ಸಿ. ದಿವಾಕರ್ (ರಾಜ್ಯ ಭೂ ಬ್ಯಾಂಕ್ ನಿರ್ದೇಶಕರು), ಚಿಕ್ಕಮಗಳೂರು ಭೂ ಬ್ಯಾಂಕ್ ಮ್ಯಾನೇಜರ್ ಟಿ ಹೆಚ್. ಕೃಷ್ಣಮೂರ್ತಿ, ಅಸಿಸ್ಟೆಂಟ್ ರಿಜಿಸ್ಟ್ರಾರ್ ರಮಣ ರೆಡ್ಡಿ. ಬ್ಯಾಂಕಿನ ನಿರ್ದೇಶಕ ಕೋಣೆಗದ್ದೆ ಪದ್ಮನಾಭ ಸ್ವಾಗತಿಸಿದರು. ಕಾರ್ಯದರ್ಶಿ ಚಂದ್ರಶೇಖರ್ ಬ್ಯಾಂಕಿನ ವರದಿ ಓದಿದರು. ಬ್ಯಾಂಕಿನ ಅಧ್ಯಕ್ಷರಾದ ಕುಸುರಿಗೆ ಕೃಷ್ಣಪ್ಪ ಗೌಡ ವಂದಿಸಿದರು.



**ವ್ಯವಸಾಯೋತ್ಪನ್ನ ಮಾರುಕಟ್ಟೆ ಸಮಿತಿಯ ಕಾರ್ಯಾಲಯ, ಶಿವಮೊಗ್ಗ.**

ಕ್ರಮ ಸಂಖ್ಯೆ : ವ್ಯಮಾಸ: ಶಿ: ಅವಿ : 8960 : 85-86 ದಿನಾಂಕ : 2ನೇ ಮೇ 1986

## ಸಂಕ್ಷಿಪ್ತ ಟೆಂಡರ್ ಪ್ರಕಟಣೆ

ವ್ಯವಸಾಯೋತ್ಪನ್ನ ಮಾರುಕಟ್ಟೆ ಸಮಿತಿ, ಶಿವಮೊಗ್ಗ ಇವರಿಂದ ಈ ಕೆಳಕಂಡ ಕಾಮಗಾರಿಗಳ ಕೆಲಸಕ್ಕೆ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಲ್ಪಟ್ಟ ಗುತ್ತಿಗೆದಾರರಿಂದ ಮೊಹರು ಮಾಡಿದ ಟೆಂಡರುಗಳನ್ನು ದ್ವಿಪ್ರತಿಯಲ್ಲಿ ಕರೆಯಲಾಗಿದೆ.

| ಕ್ರಮ ಸಂಖ್ಯೆ | ಕೆಲಸದ ಹೆಸರು | ಟೆಂಡರಿಗೆ ಇಟ್ಟ ಮೊಬಲಗು | ಇ. ಎಂ. ಡಿ. | ಕಾಮಗಾರಿ ಮುಗಿಸಬೇಕಾದ ಅವಧಿ | ಗುತ್ತಿಗೆದಾರರ ದರ್ಜೆ | ಟೆಂಡರು ಫಾರ್ಮಿನ ಬೆಲೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1) | ಸಮಿತಿಯ ಪ್ರಾಂಗಣದಲ್ಲಿ ಬತ್ತ ಒಣಗಿಸುವ ಯಂತ್ರದ ಕಟ್ಟಡಕ್ಕೆ ಕಬ್ಬಿಣದ ಟ್ರಸಸ್‌ಗಳನ್ನು ಮತ್ತು ಪರ್ಲಿನ್ಸ್‌ಗಳನ್ನು ತಯಾರಿಸಿ ಜೋಡಿಸುವುದು ಇತ್ಯಾದಿ | ರೂ. 3,02,064-00 | 7,552-00 | 6 ತಿಂಗಳು | 3 ಮತ್ತು ಮೇಲ್ಪಟ್ಟು | ನಗದು ರೂ. 30.00, ಅಂಚೆ ಮೂಲ್ಯ ರೂ. 40 |
| 2) | ಸಮಿತಿಯ ಪ್ರಾಂಗಣದೊಳಗೆ ನಂ. 3 ಮತ್ತು 4ನೇ ಬ್ಲಾಕ್ ನೌಕರರ ವಸತಿ ಗೃಹ ನಿರ್ಮಾಣ | ರೂ. 8,23,054-00 | 16,461-00 | 18 " | 2 " | ನಗದು ರೂ. 75- ಅಂಚೆ ಮೂಲಕ ರೂ. 85-00 |
| 3) | ಸಮಿತಿಯ ಪ್ರಾಂಗಣದೊಳಗೆ ಕಾರ್ಯದರ್ಶಿಯವರ ವಸತಿ ಗೃಹ ನಿರ್ಮಾಣ | ರೂ. 2,25,364-00 | 5,635-00 | 6 " | 3 " | ನಗದು ರೂ. 30- ಅಂಚೆ ಮೂಲಕ ರೂ. 40-00 |
| 4) | ಸಮಿತಿಯ ಪ್ರಾಂಗಣದಲ್ಲಿರುವ ಆಡಳಿತ ಕಚೇರಿಯ ಮೇಲೆ "ನಿಯಾನ್ ಸೈನ್" ತಯಾರಿಸಿ ಅಳವಡಿಸುವುದು | ರೂ. 30,357-00 | 759-00 | 2 " | 3 ಮತ್ತು ಮೇಲ್ಪಟ್ಟು ಲೋಕೋಪಯೋಗಿ ಇಲಾಖೆಯಲ್ಲಿ ಮತ್ತು ವಿದ್ಯುಚ್ಛಕ್ತಿ ಇಲಾಖೆಯಿಂದ | ನಗದು ರೂ. 20- ಅಂಚೆ ಮೂಲಕ ರೂ. 30-00 |

1) ಕ್ರಮಸಂಖ್ಯೆ : 1 ಮತ್ತು 4ಕ್ಕೆ ಐಟಂ ವಾರ್ ಟೆಂಡರು ಮತ್ತು 2 ಮತ್ತು 3ಕ್ಕೆ ಪ್ರತಿಶತ ಟೆಂಡರು ಕರೆದಿದೆ.
2) ಖಾಲಿ ಟೆಂಡರು ಫಾರ್ಮುಗಳಿಗಾಗಿ ಅರ್ಜಿಯನ್ನು ಸ್ವೀಕರಿಸಲು ಕೊನೆಯ ದಿನಾಂಕ : 24-5-1986ರ ಸಂಜೆ 5 ಗಂಟೆವರೆಗೆ
3) ಖಾಲಿ ಟೆಂಡರು ಫಾರ್ಮುಗಳನ್ನು ತಾ॥ 26-5-86ರಿಂದ 3-6-86ರವರೆಗೆ ಕೊಡಲಾಗುತ್ತದೆ.
4) ಮೊಹರಾದ ಟೆಂಡರುಗಳನ್ನು ತಾ॥ 5-6-1986ರಂದು ಮುಂಜಾನೆ 11 ಗಂಟೆಯವರೆಗೆ ಕಾರ್ಯದರ್ಶಿಯವರ ಕಚೇರಿಯಲ್ಲಿ ಸ್ವೀಕರಿಸಿ, ಸಾಧ್ಯವಾದಲ್ಲಿ ಅಂದೇ ತೆರೆಯಲಾಗುವುದು.

(ಸಹಿ) ಹೆಚ್. ಎಂ. ರಾಮಕೃಷ್ಣ ರೆಡ್ಡಿ, ಕಾರ್ಯದರ್ಶಿ, (ಸಹಿ) ಕೆ.ಎಸ್. ವೀರಪ್ಪ ಗೌಡ, ಅಧ್ಯಕ್ಷರು,
ವ್ಯವಸಾಯೋತ್ಪನ್ನ ಮಾರುಕಟ್ಟೆ ಸಮಿತಿ, ಶಿವಮೊಗ್ಗ.

ಸಂಪಾದಕ, ಮುದ್ರಕ, ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ, ಅಚ್ಚು: [illegible], ಕೊಪ್ಪ.